# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1740

ಸದಸ್ಯರ ಹೆಸರು : ಶ್ರೀ ಕೆ. ಹರೀಶ್ ಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 14-03-2022

ಉತ್ತರಿಸುವ ಸಚಿವರು : ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು

***

| | ಪ್ರಶ್ನೆ | ಉತ್ತರ |
|---|---|---|
| ಅ) | ಇತ್ತೀಚೆಗೆ ಕೆ.ಪಿ.ಟಿ.ಸಿ.ಎಲ್.ನಿಂದ (ಅಧಿಸೂಚನೆ ಸಂಖ್ಯೆ: ಕವಿಪ್ರನಿನಿ/2016/21723/2021-22) ಒಟ್ಟು ಎಷ್ಟು ಹುದ್ದೆಗಳ ನೇಮಕಾತಿಗಾಗಿ ಅಧಿಸೂಚನೆಯನ್ನು ಹೊರಡಿಸಲಾಗಿದೆ; | ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ಉದ್ಯೋಗ ಪ್ರಕಟಣೆ ಸಂಖ್ಯೆ: ಕವಿಪ್ರನಿನಿ/ಬಿ16/21723/2021-22, ದಿನಾಂಕ: 01.02.2022 ರ ಅನ್ವಯ ಒಟ್ಟು 1492 ಹುದ್ದೆಗಳ ಭರ್ತಿಗೆ ಅಧಿಸೂಚನೆ ಹೊರಡಿಸಲಾಗಿರುತ್ತದೆ. ವಿವರ ಈ ಕೆಳಕಂಡಂತಿದೆ. |

| ಕ್ರ. ಸಂ. | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ | | |
|---|---|---|---|---|
| | | ಮಿಕ್ಕುಳಿದ ವೃಂದ | ಸ್ಥಳೀಯ ವೃಂದ | ಒಟ್ಟು |
| 1. | ಸಹಾಯಕ ಇಂಜಿನಿಯರ್(ವಿ) | 399 | 106 | **505** |
| 2. | ಸಹಾಯಕ ಇಂಜಿನಿಯರ್ (ಸಿವಿಲ್) | 21 | 7 | **28** |
| 3. | ಕಿರಿಯ ಇಂಜಿನಿಯರ್(ವಿ) | 486 | 84 | **570** |
| 4. | ಕಿರಿಯ ಇಂಜಿನಿಯರ್(ಸಿವಿಲ್) | 21 | 8 | **29** |
| 5. | ಕಿರಿಯ ಸಹಾಯಕ | 357 | 3 | **360** |
| | ಒಟ್ಟು | **1284** | **208** | **1492** |

| | | |
|---|---|---|
| ಆ) | ಈ ನೇಮಕಾತಿಯಲ್ಲಿ ಕಲ್ಯಾಣ ಕರ್ನಾಟಕ ಭಾಗಕ್ಕೆ ಪ್ರತಿಶತ ಎಷ್ಟು ಪ್ರಮಾಣದ ಹುದ್ದೆಗಳನ್ನು ಮೀಸಲಿರಿಸಲಾಗಿದೆ; | ಅನುಚ್ಛೇದ 371(ಜೆ) ಅನ್ವಯ ಕಲ್ಯಾಣ ಕರ್ನಾಟಕ ಪ್ರದೇಶ ವ್ಯಾಪ್ತಿಯ ಕಚೇರಿಗಳಲ್ಲಿ ಗುಂಪು-ಎ ಮತ್ತು ಬಿ ಪದವೃಂದದ ಹುದ್ದೆಗಳಿಗೆ ಶೇ.75, ಗುಂಪು-ಸಿ ಪದವೃಂದದ ಹುದ್ದೆಗಳಿಗೆ ಶೇ.80 ಮತ್ತು ಗುಂಪು-ಡಿ ಪದವೃಂದದ ಹುದ್ದೆಗಳಿಗೆ ಶೇ.85 ರಷ್ಟು ಹುದ್ದೆಗಳನ್ನು ಮೀಸಲಿರಿಸಲಾಗಿರುತ್ತದೆ ಮತ್ತು ಬೆಂಗಳೂರು ನಗರದ ಬಿ.ಬಿ.ಎಂ.ಪಿ. ವ್ಯಾಪ್ತಿಯಲ್ಲಿನ ಕಚೇರಿಗಳಲ್ಲಿ ಎಲ್ಲಾ ಪದವೃಂದದ ಹುದ್ದೆಗಳಿಗೆ ಶೇ.8 ರಷ್ಟು ಹುದ್ದೆಗಳನ್ನು ಮೀಸಲಿರಿಸಲಾಗಿರುತ್ತದೆ. ನೇರ ನೇಮಕಾತಿ ಕೋಟಾದಲ್ಲಿ ಖಾಲಿ ಇರುವ 208 ಪದವೃಂದದ ಹುದ್ದೆಗಳನ್ನು ಈ ನೇಮಕಾತಿಯಲ್ಲಿ ಅಧಿಸೂಚಿಸಲಾಗಿರುತ್ತದೆ. |

| | | |
|---|---|---|
| ಇ) | ಈ ನೇಮಕಾತಿಯ ಅಧಿಸೂಚನೆಯಲ್ಲಿ ಕಲ್ಯಾಣ ಕರ್ನಾಟಕ ಭಾಗಕ್ಕೆ ಕಿರಿಯ ಸಹಾಯಕ ಹುದ್ದೆಗಳ ಒಟ್ಟು 360 ಪೈಕಿ ಕೇವಲ 3 ಹುದ್ದೆಗಳನ್ನು ಮಾತ್ರ ಮೀಸಲಿಡಲು ಕಾರಣವೇನು; ಇನ್ನೂ ಹೆಚ್ಚಿನ ಹುದ್ದೆಗಳನ್ನು ಕಲ್ಯಾಣ ಕರ್ನಾಟಕ ಭಾಗಕ್ಕೆ ಸೇರಿಸುವ ಆಲೋಚನೆ ಇದೆಯೇ? (ಈ ಬಗ್ಗೆ ಸಂಪೂರ್ಣ ಮಾಹಿತಿ ನೀಡುವುದು) | ಅನುಚ್ಛೇಧ-371(ಜೆ) ಅಡಿಯಲ್ಲಿ ಕಲ್ಯಾಣ ಕರ್ನಾಟಕ ಮೀಸಲಾತಿಗೆ ಸಂಬಂಧಿಸಿದಂತೆ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ವ್ಯಾಪ್ತಿಯ ನೇರ ನೇಮಕಾತಿ ಕೋಟಾದಲ್ಲಿ 3 ಹುದ್ದೆಗಳು ಖಾಲಿಯಿರುತ್ತವೆ. ಆದ್ದರಿಂದ, ದಿನಾಂಕ: 01.02.2022 ರ ಉದ್ಯೋಗ ಪ್ರಕಟಣೆಯಲ್ಲಿ ಕಿರಿಯ ಸಹಾಯಕ ಹುದ್ದೆಯ 3 ಹುದ್ದೆಗಳನ್ನು ಅಧಿಸೂಚಿಸಲಾಗಿರುತ್ತದೆ. |

ಸಂಖ್ಯೆ: ಎನರ್ಜಿ 70 ಇಬಿಎಸ್ 2022

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು
ಸಂಸ್ಕೃತಿ ಸಚಿವರು